KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಫೆಬ್ರವರಿ ೨೪, ೨೦೧೧ (ಫಾಲ್ಗುಣ ೫ ಶಕ ವರ್ಷ ೧೯೩೨) | ಸಂಚಿಕೆ ೮ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ:ಆಕುಕ 24 ಪಿಟಿಡಿ 2010, ಬೆಂಗಳೂರು, ದಿನಾಂಕ:12–01–2011**

ಆಯುಷ್ ಇಲಾಖೆಯಲ್ಲಿ ಉಪನ್ಯಾಸಕರು (ಯುನಾನಿ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಆಕುಕ 24 ಪಿಟಿಡಿ 2010, ದಿನಾಂಕ:14–05–2010 ರಲ್ಲಿ ಪ್ರಕಟಿಸಿ, ಬಾಧಿತ ಅಧಿಕಾರಿಗಳಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು. ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಯಾವುದೇ ಆಕ್ಷೇಪಣೆಗಳನ್ನು ನಿಗದಿತ ಕಾಲಾವಧಿಯಲ್ಲಿ ಸ್ವೀಕರಿಸಿರುವುದಿಲ್ಲ.

ಆದುದರಿಂದ, ಉಪನ್ಯಾಸಕರು (ಯುನಾನಿ) ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ:01–01–2010 ರಲ್ಲಿರುವಂತೆ ಸಿದ್ಧಪಡಿಸಿ ಅನುಬಂಧದಲ್ಲಿ ಇದರೊಂದಿಗೆ ಲಗತ್ತಿಸಿ ಅಂತಿಮವಾಗಿ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಇಟಗಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**ಅನುಬಂಧ**

**ದಿನಾಂಕ:01–01–2010 ರಲ್ಲಿರುವಂತೆ ಆಯುಷ್ ಇಲಾಖೆಯ ಉಪನ್ಯಾಸಕರು (ಯುನಾನಿ) ವೃಂದದ ಅಂತಿಮ ಜೇಷ್ಠತಾ ಪಟ್ಟಿ.**

| ಕ್ರ. ಸಂ. | ಹೆಸರು ಶ್ರೀ / ಶ್ರೀಮತಿ | ನೇರ ನೇಮಕಾತಿ / ಮುಂಬಡ್ತಿ/ ಇತರೆ | ಮೀಸಲಾತಿ / ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ / ಜೇಷ್ಠತೆಗೆ ನೈಜ ಅರ್ಹತೆ ದಿನಾಂಕ | ಷರಾ |
|---|---|---|---|---|---|---|---|---|
| 1 | ಡಾ:ರೂಹಿ ಜಮಾನ್ | ವೃಂದ ಬದಲಾವಣೆ | ಸಾಮಾನ್ಯ | 04–04–62 | 29–10–86 | – | 13–07–2000 | |
| 2 | ಡಾ:ಎಸ್. ಮಂಜುಳ | ನೇರ ನೇಮಕಾತಿ | ಪರಿಶಿಷ್ಟ ಜಾತಿ | 18–03–75 | 03–02–03 | – | 03–02–2003 | |
| 3 | ಡಾ:ಬಸವರಾಜ್ ಎಸ್. ಬಗ್ಲಿ | ನೇರ ನೇಮಕಾತಿ | ಪರಿಶಿಷ್ಟ ಪಂಗಡ | 21–07–76 | 10–02–03 | – | 10–02–2003 | |

**ಆರ್.ಎಸ್. ಇಟಗಿ**

ಪಿ.ಆರ್.148

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

### ಅಧಿಸೂಚನೆ

**ಸಂಖ್ಯೆ:ಆಕುಕ 29 ಪಿಟಿಡಿ 2010, ಬೆಂಗಳೂರು, ದಿನಾಂಕ:12–01–2011**

ಆಯುಷ್ ಇಲಾಖೆಯಲ್ಲಿ ಉಪನ್ಯಾಸಕರು (ಆಯುರ್ವೇದ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಆಕುಕ 29 ಪಿಟಿಡಿ 2010, ದಿನಾಂಕ:19–05–2010 ರಲ್ಲಿ ಪ್ರಕಟಿಸಿ, ಬಾಧಿತ ಅಧಿಕಾರಿಗಳಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು. ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಯಾವುದೇ ಆಕ್ಷೇಪಣೆಗಳನ್ನು ನಿಗದಿತ ಕಾಲಾವಧಿಯಲ್ಲಿ ಸ್ವೀಕರಿಸಿರುವುದಿಲ್ಲ.

ಆದುದರಿಂದ, ಉಪನ್ಯಾಸಕರು (ಆಯುರ್ವೇದ) ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ:01–01–2010 ರಲ್ಲಿರುವಂತೆ ಸಿದ್ಧಪಡಿಸಿ ಅನುಬಂಧದಲ್ಲಿ ಇದರೊಂದಿಗೆ ಲಗತ್ತಿಸಿ ಅಂತಿಮವಾಗಿ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಇಟಗಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**ಅನುಬಂಧ**

**ದಿನಾಂಕ:01–01–2010 ರಲ್ಲಿರುವಂತೆ ಆಯುಷ್ ಇಲಾಖೆಯ ಉಪನ್ಯಾಸಕರು (ಆಯುರ್ವೇದ) ವೃಂದದ ಅಂತಿಮ ಜೇಷ್ಠತಾ ಪಟ್ಟಿ.**

| ಕ್ರ. ಸಂ. | ಹೆಸರು ಶ್ರೀ / ಶ್ರೀಮತಿ | ನೇರ ನೇಮಕಾತಿ / ಮುಂಬಡ್ತಿ/ ಇತರೆ | ಮೀಸಲಾತಿ / ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ / ಜೇಷ್ಠತೆಗೆ ನೈಜ ಅರ್ಹತೆ ದಿನಾಂಕ | ಷರಾ |
|---|---|---|---|---|---|---|---|---|
| 1 | ಡಾ:ಆರ್.ಸಿ. ಮೈತ್ರೇಯಿ | ನೇಮಕಾತಿ | ಪ.ಜಾತಿ | 20–04–74 | 08–12–04 | – | 08–12–2004 | |
| 2 | ಡಾ:ವೈ.ಎಸ್. ಜಾನಕಿ | ನೇಮಕಾತಿ | ಪ.ಪಂಗಡ | 02–11–73 | 16–06–06 | – | 16–06–2006 | |
| 3 | ಡಾ:ಮಮತಾ ಆಚಾರ್ಯ | ನೇಮಕಾತಿ | ಸಾಮಾನ್ಯ | 25–11–72 | 13–10–06 | – | 13–10–2006 | ಗುತ್ತಿಗೆ ಉಪನ್ಯಾಸಕರ ಸೇವೆಯಿಂದ ಸರ್ಕಾರಿ ಸೇವೆಯಲ್ಲಿ ವಿಲೀನಗೊಂಡಿರುವ ಸರ್ಕಾರಿ ಆದೇಶ ಸಂಖ್ಯೆ:ಆಕುಕ 04 ಪಿಟಿಡಿ 2005, ದಿನಾಂಕ: 13–10–2006 ರಂತೆ ಜೇಷ್ಠತೆ ನೀಡಿದೆ. |
| 4 | ಡಾ:ರಾಜಶೇಖರ ಶಂಕರಪ್ಪ ಗಾಣಿಗೇರ | ನೇಮಕಾತಿ | ಸಾಮಾನ್ಯ | 22–07–72 | 13–10–06 | – | 13–10–2006 | |
| 5 | ಡಾ:ಮಾಧವ ದಿಗ್ಗಾವಿ | ನೇಮಕಾತಿ | ಸಾಮಾನ್ಯ | 10–11–71 | 13–10–06 | – | 13–10–2006 | |
| 6 | ಡಾ:ಶ್ಯಾಮ್‌ಕಿಶೋರ್ ಸಿಂಗ್ | ನೇಮಕಾತಿ | ಸಾಮಾನ್ಯ | 15–05–63 | 13–10–06 | – | 13–10–2006 | |
| 7 | ಡಾ:ಶ್ರೀವತ್ಸ | ನೇಮಕಾತಿ | ಸಾಮಾನ್ಯ | 16–03–74 | 13–10–06 | – | 13–10–2006 | |

**ಆರ್.ಎಸ್. ಇಟಗಿ**

ಪಿ.ಆರ್.149

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

### ಅಧಿಸೂಚನೆ

**ಸಂಖ್ಯೆ:ಆಕುಕ 36 ಪಿಟಿಡಿ 2010, ಬೆಂಗಳೂರು, ದಿನಾಂಕ:12–01–2011**

ಆಯುಷ್ ಇಲಾಖೆಯಲ್ಲಿ ದಿನಾಂಕ:01–01–2006 ರಲ್ಲಿರುವಂತೆ ಪ್ರಾಧ್ಯಾಪಕರು (ಹೋಮಿಯೋಪತಿ) ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ:25–04–2007 ರಲ್ಲಿ ಹೊರಡಿಸಲಾಗಿದೆ. ಸಿ.ಸಿ.ಐ.ಎಂ. ನಾರ್ಮ್ಸ್ ಅನ್ವಯ ವಿಷಯವಾರು / ತಜ್ಞತೆವಾರು ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸುವ ಬಗ್ಗೆ ಪರಿಶೀಲಿಸುತ್ತಿರುವುದರಿಂದ, ಇದುವರೆಗೂ ಜೇಷ್ಠತಾ ಪಟ್ಟಿಯನ್ನು ಹೊರಡಿಸಿರುವುದಿಲ್ಲ.

ಈ ಹಿನ್ನೆಲೆಯಲ್ಲಿ, ಆಯುಷ್ ಇಲಾಖೆಯಲ್ಲಿ ದಿನಾಂಕ:01–01–2010 ರಲ್ಲಿರುವಂತೆ ಪ್ರಾಧ್ಯಾಪಕರು (ಹೋಮಿಯೋಪತಿ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಅನುಬಂಧದಲ್ಲಿರುವಂತೆ ಪ್ರಕಟಿಸಲಾಗುತ್ತದೆ. ಈ ಬಗ್ಗೆ ಬಾಧಿತರಿಂದ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಒಂದು ತಿಂಗಳೊಳಗಾಗಿ ತಮ್ಮ ಆಕ್ಷೇಪಣೆಗಳನ್ನು ಪೂರಕ ದಾಖಲಾತಿಗಳೊಂದಿಗೆ ಸರ್ಕಾರದ ಕಾರ್ಯದರ್ಶಿಗಳು (ವೈದ್ಯಕೀಯ ಶಿಕ್ಷಣ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಧಾನ ಸೌಧ, ಬೆಂಗಳೂರು–1 ಇವರಿಗೆ ಸಲ್ಲಿಸತಕ್ಕದ್ದು. ನಿಗದಿತ ಅವಧಿಯ ನಂತರ ಬಂದಂತಹ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಇಟಗಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**ಅನುಬಂಧ**

**ದಿನಾಂಕ:01-01-2010 ರಲ್ಲಿರುವಂತೆ ಆಯುಷ್ ಇಲಾಖೆಯ ಪ್ರಾಧ್ಯಾಪಕರು (ಹೋಮಿಯೋಪತಿ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ.**

| ಕ್ರ. ಸಂ. | ಹೆಸರು ಶ್ರೀ / ಶ್ರೀಮತಿ | ನೇರ ನೇಮಕಾತಿ / ಮುಂಬಡ್ತಿ/ ಇತರೆ | ಮೀಸಲಾತಿ / ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ / ಜೇಷ್ಠತೆಗೆ ನೈಜ ಅರ್ಹತೆ ದಿನಾಂಕ | ಷರಾ |
|---|---|---|---|---|---|---|---|---|
| 1 | ಡಾ:ನಾರಾಯಣ ಸಿ. ದೇಶಪಾಂಡೆ | ಮುಂಬಡ್ತಿ | ಸಾಮಾನ್ಯ | 13-02-56 | 15-05-92 | 04-03-99 | 04-03-1999 | |
| 2 | ಡಾ:ಸಂಧ್ಯಾ ಕೆ. ಮಣೂರ | ಮುಂಬಡ್ತಿ | ಸಾಮಾನ್ಯ | 23-02-60 | 14-05-92 | 08-03-04 | 08-03-2004 | |
| 3 | ಡಾ:ಮುನೀರ್ ಅಹಮದ್ ಆರ್. | ಮುಂಬಡ್ತಿ | ಸಾಮಾನ್ಯ | 02-09-63 | 17-01-92 | 09-03-04 | 09-03-2004 | |
| 4 | ಡಾ:ಉಷಾ ಎಸ್. | ಮುಂಬಡ್ತಿ | ಸಾಮಾನ್ಯ | 04-07-61 | 07-05-92 | 14-02-05 | 14-02-2005 | |
| 5 | ಡಾ:ಜಡ್.ಎಂ.ಎಲ್. ಹಸನ್ | ಮುಂಬಡ್ತಿ | ಸಾಮಾನ್ಯ | 11-10-57 | 06-05-92 | 14-02-05 | 14-02-2005 | |
| 6 | ಡಾ:ಬಿ.ಎಲ್. ಅಶ್ವಥ್ ಕುಮಾರ್ | ಮುಂಬಡ್ತಿ | ಸಾಮಾನ್ಯ | 10-10-58 | 16-05-92 | 11-02-05 | 11-02-2005 | |
| 7 | ಡಾ:ವಿ. ಗುರುಪ್ರಸಾದ್ | ಮುಂಬಡ್ತಿ | ಪರಿಶಿಷ್ಟ ಜಾತಿ | 25-06-64 | 08-05-92 | 11-02-05 | 11-02-2005 | |
| 8 | ಡಾ:ಡಿ. ದಾಸಪ್ಪ | ಮುಂಬಡ್ತಿ | ಪರಿಶಿಷ್ಟ ಜಾತಿ | 22-06-56 | 08-05-92 | 27-05-05 | 27-05-2005 | |
| 9 | ಡಾ:ಶ್ರೀಪಾದ ಹೆಗ್ಗಡೆ | ಮುಂಬಡ್ತಿ | ಸಾಮಾನ್ಯ | 23-01-59 | 07-05-92 | 02-12-05 | 02-12-2005 | |
| 10 | ಡಾ:ಎಂ. ಪ್ರಕಾಶ್‌ಕುಮಾರ್ | ಮುಂಬಡ್ತಿ | ಸಾಮಾನ್ಯ | 20-07-60 | 27-10-86 | 15-09-06 | 15-09-2006 | |

**ಆರ್.ಎಸ್. ಇಟಗಿ**

ಪಿ.ಆರ್.150

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಅಧಿಸೂಚನೆ

**ಸಂಖ್ಯೆ:ಆಕುಕ 35 ಪಿಟಿಡಿ 2010, ಬೆಂಗಳೂರು, ದಿನಾಂಕ:12-01-2011**

ಆಯುಷ್ ಇಲಾಖೆಯಲ್ಲಿ ಸಹಾಯಕ ಪ್ರಾಧ್ಯಾಪಕರು (ಯುನಾನಿ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಆಕುಕ 35 ಪಿಟಿಡಿ 2010, ದಿನಾಂಕ:19-05-2010 ರಲ್ಲಿ ಪ್ರಕಟಿಸಿ, ಬಾಧಿತ ಅಧಿಕಾರಿಗಳಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು. ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಯಾವುದೇ ಆಕ್ಷೇಪಣೆಗಳನ್ನು ನಿಗದಿತ ಕಾಲಾವಧಿಯಲ್ಲಿ ಸ್ವೀಕರಿಸಿರುವುದಿಲ್ಲ.

ಆದುದರಿಂದ, ಸಹಾಯಕ ಪ್ರಾಧ್ಯಾಪಕರು (ಯುನಾನಿ) ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ:01-01-2010 ರಲ್ಲಿರುವಂತೆ ಸಿದ್ಧಪಡಿಸಿ ಅನುಬಂಧದಲ್ಲಿ ಇದರೊಂದಿಗೆ ಲಗತ್ತಿಸಿ ಅಂತಿಮವಾಗಿ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಇಟಗಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**ಅನುಬಂಧ**

**ದಿನಾಂಕ:01-01-2010 ರಲ್ಲಿರುವಂತೆ ಆಯುಷ್ ಇಲಾಖೆಯ ಸಹಾಯಕ ಪ್ರಾಧ್ಯಾಪಕರು (ಯುನಾನಿ) ವೃಂದದ ಅಂತಿಮ ಜೇಷ್ಠತಾ ಪಟ್ಟಿ.**

| ಕ್ರ. ಸಂ. | ಹೆಸರು ಶ್ರೀ / ಶ್ರೀಮತಿ | ನೇರ ನೇಮಕಾತಿ / ಮುಂಬಡ್ತಿ/ ಇತರೆ | ಮೀಸಲಾತಿ / ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ / ಜೇಷ್ಠತೆಗೆ ನೈಜ ಅರ್ಹತೆ ದಿನಾಂಕ | ಷರಾ |
|---|---|---|---|---|---|---|---|---|
| 1 | ಡಾ:ಅನೀಸ್ ಅಹಮ್ಮದ್ | ಮುಂಬಡ್ತಿ | ಸಾಮಾನ್ಯ | 01-06-57 | 09-12-85 | 12-07-1999 | 12-07-1999 | |
| 2 | ಡಾ:ಸಿ. ಜಿಲಾನಿ | ಮುಂಬಡ್ತಿ | ಸಾಮಾನ್ಯ | 04-05-61 | 07-12-85 | 12-07-1999 | 12-07-1999 | |

| ಕ್ರ. ಸಂ. | ಹೆಸರು ಶ್ರೀ / ಶ್ರೀಮತಿ | ನೇರ ನೇಮಕಾತಿ / ಮುಂಬಡ್ತಿ/ ಇತರೆ | ಮೀಸಲಾತಿ / ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ / ಜೇಷ್ಠತೆಗೆ ನೈಜ ಅರ್ಹತೆ ದಿನಾಂಕ | ಷರಾ |
|---|---|---|---|---|---|---|---|---|
| 3 | ಡಾ:ಎ.ಎಂ. ಮಹಮದ್ ಖಲೀಲುಲ್ಲಾ ಷರೀಫ್ | ಮುಂಬಡ್ತಿ | ಸಾಮಾನ್ಯ | 09–08–53 | 08–01–86 | 12–07–1999 | 12–07–1999 | |
| 4 | ಡಾ:ಎಂ.ಎನ್. ಮಲ್ಲೇಶಗೌಡ | ಮುಂಬಡ್ತಿ | ಸಾಮಾನ್ಯ | 07–06–59 | 08–01–86 | 12–07–1999 | 12–07–1999 | |
| 5 | ಡಾ:ಶಾಹೀನಾ ಬೇಗಂ | ಮುಂಬಡ್ತಿ | ಸಾಮಾನ್ಯ | 12–01–59 | 03–08–87 | 23–05–2000 | 23–05–2000 | |
| 6 | ಡಾ:ಸಲ್ಮಾ ಬಾನು | ಮುಂಬಡ್ತಿ | ಸಾಮಾನ್ಯ | 12–01–61 | 04–02–91 | 23–12–2000 | 23–12–2000 | |
| 7 | ಡಾ:ರಹಮತುಲ್ಲಾ ಷರೀಫ್ ಎ.ಆರ್. | ಮುಂಬಡ್ತಿ | ಸಾಮಾನ್ಯ | 29–07–58 | 23–10–86 | 13–02–2001 | 13–02–2001 | |
| 8 | ಡಾ:ರಕ್ಷಿಂದಾ ಸುಭಾನಿ | ಮುಂಬಡ್ತಿ | ಸಾಮಾನ್ಯ | 01–10–59 | 29–10–86 | 13–02–2001 | 13–02–2001 | |
| 9 | ಡಾ:ಉಮ್ರಾಜ್ ಮುಬೀನ್ | ಮುಂಬಡ್ತಿ | ಸಾಮಾನ್ಯ | 01–06–59 | 28–10–86 | 06–03–2002 | 06–03–2002 | |
| 10 | ಡಾ:ಲತೀಫ್ ಅಹಮ್ಮದ್ ಜಿ. ಇಂಡಿಕರ್ | ಮುಂಬಡ್ತಿ | ಸಾಮಾನ್ಯ | 27–07–58 | 30–10–86 | 21–06–2005 | 21–06–2005 | |
| 11 | ಡಾ:ಮಹಮ್ಮದ್ ಸೈಯದ್ | ಮುಂಬಡ್ತಿ | ಸಾಮಾನ್ಯ | 22–12–62 | 01–01–96 | 21–06–2005 | 21–06–2005 | |
| 12 | ಡಾ:ಫಯಾಜ್ ಅಹಮ್ಮದ್ ಷರೀಫ್ | ಮುಂಬಡ್ತಿ | ಸಾಮಾನ್ಯ | 03–03–61 | 28–10–86 | 21–06–2005 | 21–06–2005 | |

**ಆರ್.ಎಸ್. ಇಟಗಿ**

ಪಿ.ಆರ್.151

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** **ಬಾಗಲಕೋಟೆ** ಜಿಲ್ಲೆ, **ಹುನಗುಂದ** ತಾಲ್ಲೂಕು, **ಬಲಕುಂದಿ** ಗ್ರಾಮದಲ್ಲಿ ಪಿಂಕ್ ಗ್ರಾನೈಟ್‌ಗಾಗಿ ಶ್ರೀ. **ಎಂ.ಮಲ್ಲೇಶಪ್ಪ** ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **512** ರ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ **ರೂ.1,36,413**/–ಗಳನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಅಂತಿಮ ನೋಟೀಸ್ ಪತ್ರ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/512/2009–10/3770:21, ದಿನಾಂಕ:2–11–2010.

2. 2009–10 ನೇ ಸಾಲಿನ ಲೆಕ್ಕ ಪರಿಶೀಲನಾ ವರದಿ

**ಪ್ರಸ್ತಾವನೆ:**

**ಬಾಗಲಕೋಟೆ** ಜಿಲ್ಲೆ, **ಹುನಗುಂದ** ತಾಲ್ಲೂಕು, **ಬಲಕುಂದಿ** ಗ್ರಾಮದ ಸರ್ವೆ ಸಂಖ್ಯೆ: 296/3 ರಲ್ಲಿ ಶ್ರೀ **ಎಂ.ಮಲ್ಲೇಶಪ್ಪ** ರವರಿಗೆ ಪಿಂಕ್ ಗ್ರಾನೈಟ್‌ಗಾಗಿ 0.25 ಎಕರೆಗೆ ದಿನಾಂಕ: 12–4–2002 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **512** ರಲ್ಲಿ ಗುತ್ತಿಗೆಯು ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (1) ರಂತೆ ಗುತ್ತಿಗೆದಾರರಿಗೆ ಅಂತಿಮ ನೋಟೀಸು ಪತ್ರವನ್ನು ನೀಡಿ ಗುತ್ತಿಗೆ ಮೇಲಿನ ಬಾಕಿಯನ್ನು 60 ದಿನಗಳೊಳಗೆ ಸಂದಾಯಿಸುವಂತೆ ತಿಳಿಸಲಾಗಿತ್ತು. ಆದರೆ, 2009–10 ನೇ ಸಾಲಿನ ಲೆಕ್ಕ ಪರಿಶೀಲನಾ ವರದಿಯಲ್ಲಿ ವರದಿ ಮಾಡಿರುವಂತೆ ಸಾಲಿನ ಅಂತ್ಯಕ್ಕೆ ರೂ. 1,36,413/– ಗಳು ಬಾಕಿ ಇದ್ದು ಗುತ್ತಿಗೆದಾರರು ಬಾಕಿ ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವುದಾಗಿ ವರದಿ ಮಾಡಿರುತ್ತಾರೆ. ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರು ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸ್‌ಗೆ ಯಾವ ರೀತಿಯು ಸ್ಪಂದಿಸಿಲ್ಲದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ:418:ಎಂ.ಆರ್.ಸಿ:92, ದಿನಾಂಕ: 02–7–1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 512 ರ ಗುತ್ತಿಗೆಯನ್ನು ರದ್ದು ಪಡಿಸುವ ಕ್ರಮ ಜರುಗಿಸುವುದು ಅವಶ್ಯಕವಾಗಿವುದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗಭೂಇ/ಡಿಸಿಬಿ/ಕಗಗು/512/2010–11/ 14928, ದಿನಾಂಕ:25ನೇ ಜನವರಿ, 2011**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ **ಬಾಗಲಕೋಟೆ** ಜಿಲ್ಲೆ, **ಹುನಗುಂದ** ತಾಲ್ಲೂಕು, **ಬಲಕುಂದಿ** ಗ್ರಾಮದ ಸರ್ವೆ ಸಂಖ್ಯೆ: 296/3 ರಲ್ಲಿ 0.25 ಎಕರೆಗೆ **ಪಿಂಕ್ ಗ್ರಾನೈಟ್‌ಗಾಗಿ** ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **512** ರ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೇ ಇರುವ ಕಾರಣ ತಕ್ಷಣದಿಂದ

ಜಾರಿಗೆ ಬರುವಂತೆ **ರದ್ದುಪಡಿಸಲಾಗಿದೆ** ಹಾಗೂ ಈ ಗುತ್ತಿಗೆ ಮಂಜೂರಾತಿ ಸಮಯದಲ್ಲಿ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಯು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿ.ಆರ್.166 ನಿರ್ದೇಶಕರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** **ಕೋಲಾರ** ಜಿಲ್ಲೆ, **ಮಾಲೂರು** ತಾಲ್ಲೂಕು, **ತಿರುಮಲಕೊಪ್ಪ** ಗ್ರಾಮದಲ್ಲಿ ಕಪ್ಪು ಗ್ರಾನೈಟ್‌ಗಾಗಿ **ಶ್ರೀ ಕೃಷ್ಣ ಬೋವಿ** ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **528** ರ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವ ಕಾರಣ ಲ್ಯಾಪ್ಸ್‌ಡ್‌ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ನೋಟೀಸ್ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:528:2010–11: 3304:05, ದಿನಾಂಕ: 6–7–2010.

2. ಹಿರಿಯ ಭೂವಿಜ್ಞಾನಿ (ಖ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಕೋಲಾರ ರವರ 2009–10 ನೇ ಸಾಲಿನ ಲೆಕ್ಕ ಪರಿಶೀಲನಾ ವರದಿ

**ಪ್ರಸ್ತಾವನೆ:–**

**ಕೋಲಾರ** ಜಿಲ್ಲೆ, **ಮಾಲೂರು** ತಾಲ್ಲೂಕು, **ತಿರುಮಲಕೊಪ್ಪ** ಗ್ರಾಮದ ಸರ್ವೆ ಸಂಖ್ಯೆ: 21 ರಲ್ಲಿ **ಶ್ರೀ ಕೃಷ್ಣ ಬೋವಿ** ಕಪ್ಪು ಗ್ರಾನೈಟ್‌ಗಾಗಿ 2–00 ಎಕರೆಗೆ ದಿನಾಂಕ: 17–7–2002 ರಲ್ಲಿ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 528 ರಲ್ಲಿ ಮಂಜೂರು ಮಾಡಲಾಗಿತ್ತು. 2006–07 ರಿಂದ 2009–10 ನೇ ಸಾಲಿನವರೆಗೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವುದಾಗಿ ಹಿರಿಯ ಭೂವಿಜ್ಞಾನಿ, ಕೋಲಾರ ರವರು ತಮ್ಮ ಲೆಕ್ಕ ಪರಿಶೀಲನಾ ಮತ್ತು ತಪಾಸಣಾ ವರದಿಯಲ್ಲಿ ವರದಿ ಮಾಡಿರುತ್ತಾರೆ. ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 6(1) ರಡಿಯಲ್ಲಿ ಈ ಕಛೇರಿಯ ಉಲ್ಲೇಖಿತ ಪತ್ರದಂತೆ ಗುತ್ತಿಗೆದಾರರಿಗೆ ನೋಟೀಸ್ ಪತ್ರವನ್ನು ನೀಡಿ ಗಣಿಗಾರಿಕೆ ಕಾರ್ಯವನ್ನು ಪ್ರಾರಂಭಿಸಲು ತಿಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರು ಇದುವರೆವಿಗೂ ಯಾವ ರೀತಿಯೂ ಸ್ಪಂದಿಸಿರುವುದಿಲ್ಲ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಉಲ್ಲೇಖಿತ ನೋಟೀಸ್ ಯಾವ ರೀತಿಯು ಸ್ಪಂದಿಸಿಲ್ಲದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 6(1) ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ:418:ಎಂ.ಆರ್.ಸಿ:92, ದಿನಾಂಕ: 02–7–1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 528 ರಲ್ಲಿರುವ ಕಪ್ಪು ಗ್ರಾನೈಟ್ ಗುತ್ತಿಗೆಯನ್ನು ಲ್ಯಾಪ್ಸ್‌ಡ್‌ಲೀಸ್ ಎಂದು ಪರಿಗಣಿಸಬೇಕಾಗಿರುವುದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗಭೂಇ/ಡಿಸಿಬಿ/ಕಗಗು/528/2010–11/14937/ ದಿನಾಂಕ:25ನೇ ಜನವರಿ, 2011**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 6(1) ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ **ಕೋಲಾರ** ಜಿಲ್ಲೆ, **ಮಾಲೂರು** ತಾಲ್ಲೂಕು, **ತಿರುಮಲಕೊಪ್ಪ** ಗ್ರಾಮದ ಸರ್ವೆ ಸಂಖ್ಯೆ: 21 ರಲ್ಲಿ 2–00 ಎಕರೆಗೆ ಕಪ್ಪು ಗ್ರಾನೈಟ್ ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 528 ರಲ್ಲಿರುವ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಲ್ಯಾಪ್ಸ್‌ಡ್‌ಲೀಸ್ ಎಂದು ಪರಿಗಣಿಸಲಾಗಿದೆ.

ಪಿ.ಆರ್.168 ನಿರ್ದೇಶಕರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** **ರಾಮನಗರ** ಜಿಲ್ಲೆ, **ಕನಕಪುರ** ತಾಲ್ಲೂಕು, **ಹೊಸದುರ್ಗ** ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಮೆ॥ ಮೈಸೂರು ಮಿನರಲ್ಸ್ ಲಿ., ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 613 ರ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವ ಕಾರಣ ಲ್ಯಾಪ್ಸ್‌ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ನೋಟೀಸ್ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:613: 2010–11:13241–42, ದಿನಾಂಕ: 20–12–2010.

2. ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ರಾಮನಗರ ರವರ 2009–10 ನೇ ಸಾಲಿನ ಲೆಕ್ಕ ಪರಿಶೀಲನಾ ವರದಿ

**ಪ್ರಸ್ತಾವನೆ:**

**ರಾಮನಗರ** ಜಿಲ್ಲೆ, **ಕನಕಪುರ** ತಾಲ್ಲೂಕು, **ಹೊಸದುರ್ಗ** ಗ್ರಾಮದ ಸರ್ವೆ ಸಂಖ್ಯೆ: 48 ರಲ್ಲಿ **ಮೆ॥ ಮೈಸೂರು ಮಿನರಲ್ಸ್** ಲಿ. ಮಲ್ಟಿಕಲರ್ ಗ್ರಾನೈಟ್‌ಗಾಗಿ 40.00 ಎಕರೆಗೆ ದಿನಾಂಕ: 18–12–2003 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 613 ರಲ್ಲಿ ಮಂಜೂರು ಮಾಡಲಾಗಿತ್ತು. 2006–07 ರಿಂದ 2009–10 ನೇ ಸಾಲಿನವರೆಗೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವುದಾಗಿ ಉಪ ನಿರ್ದೇಶಕರು, ರಾಮನಗರ ರವರು ತಮ್ಮ ಲೆಕ್ಕ ಪರಿಶೀಲನಾ ಮತ್ತು ತಪಾಸಣಾ ವರದಿಯಲ್ಲಿ ವರದಿ ಮಾಡಿರುತ್ತಾರೆ. ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 6(1) ರಡಿಯಲ್ಲಿ ಈ ಕಛೇರಿಯ ಉಲ್ಲೇಖಿತ ಪತ್ರದಂತೆ ಗುತ್ತಿಗೆದಾರರಿಗೆ ನೋಟೀಸ್ ಪತ್ರವನ್ನು ನೀಡಿ ಗಣಿಗಾರಿಕೆ ಕಾರ್ಯವನ್ನು ಪ್ರಾರಂಭಿಸಲು ತಿಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರು ಇದುವರೆವಿಗೂ ಯಾವ ರೀತಿಯೂ ಸ್ಪಂದಿಸಿರುವುದಿಲ್ಲ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಉಲ್ಲೇಖಿತ ನೋಟೀಸ್ ಯಾವ ರೀತಿಯು ಸ್ಪಂದಿಸಿಲ್ಲದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 6(1) ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ:418:ಎಂ.ಆರ್.ಸಿ:92, ದಿನಾಂಕ: 02–7–1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 613 ರಲ್ಲಿರುವ ಮಲ್ಟಿ ಕಲರ್ ಗ್ರಾನೈಟ್ ಗುತ್ತಿಗೆಯನ್ನು ಲ್ಯಾಪ್ಸ್‌ಡ್‌ಲೀಸ್ ಎಂದು ಪರಿಗಣಿಸಬೇಕಾಗಿರುವುದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗಭೂಇ/ಡಿಸಿಬಿ/ಕಗು/613/2010–11/15228, ದಿನಾಂಕ:29ನೇ ಜನವರಿ, 2011**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 6(1) ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು, ಹೊಸದುರ್ಗ ಗ್ರಾಮದ ಸರ್ವೆ ಸಂಖ್ಯೆ: 48 ರಲ್ಲಿ 40.00 ಎಕರೆಗೆ ಮಲ್ಟಿ ಕಲರ್ ಗ್ರಾನೈಟ್ ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 613 ರಲ್ಲಿರುವ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಲ್ಯಾಪ್ಸ್‌ಡ್‌ಲೀಸ್ ಎಂದು ಪರಿಗಣಿಸಲಾಗಿದೆ.

ಪಿ.ಆರ್.194 ನಿರ್ದೇಶಕರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ: ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು, ಕಣಿವೆಕಟ್ಟೆ** ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ **ಶ್ರೀಮತಿ .ಎಸ್.ವಿ.ಮೀನಾಕ್ಷಮ್ಮ** ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 668 ರ ಗುತ್ತಿಗೆಯನ್ನು ಪುನರ್ ಸ್ಥಾಪಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಆದೇಶ ಸಂಖ್ಯೆ:ಸಿಐ:482:ಎಂಎಂಎನ್:2010, ದಿನಾಂಕ: 1–1–2011.

2. ಸದರಿಯವರ ಮನವಿ ದಿನಾಂಕ: 22–7–2010.

**ಪ್ರಸ್ತಾವನೆ:**

**ರಾಮನಗರ** ಜಿಲ್ಲೆ, **ಕನಕಪುರ** ತಾಲ್ಲೂಕು, **ಕಣಿವೆಕಟ್ಟೆ** ಗ್ರಾಮದ ಸರ್ವೆ ಸಂಖ್ಯೆ: 2 ರಲ್ಲಿ 4.00 ಎಕರೆ ವಿಸ್ತೀರ್ಣದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 668 ರ ಗುತ್ತಿಗೆಯನ್ನು **ಶ್ರೀಮತಿ ಎಸ್.ವಿ.ಮೀನಾಕ್ಷಮ್ಮ** ರವರ ಹೆಸರಿನಲ್ಲಿ ದಿನಾಂಕ: 15–9–2004 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿದ ಕಾರಣ ದಿನಾಂಕ: 3–7–2010 ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

ಅದರಂತೆ ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53(2) ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು, ಅದರಂತೆ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಮತ್ತು ಗುತ್ತಿಗೆದಾರರು ಬಾಕಿಯನ್ನು ಪೂರ್ಣ ಪಾವತಿಸಿರುವುದರಿಂದ ಈ ಕೆಳಕಂಡ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಗಭೂಇ/ಡಿಸಿಬಿ/ಕಗು/668/2010–11/14727, ದಿನಾಂಕ:21ನೇ ಜನವರಿ, 2011**

ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಸರ್ಕಾರದ ಪತ್ರದ ದಿನಾಂಕ: 1–1–2011 ರಲ್ಲಿ ನಿರ್ದೇಶಿಸಿರುವಂತೆ ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ಕಣಿವೆಕಟ್ಟೆ ಗ್ರಾಮದ ಸರ್ವೆ ಸಂಖ್ಯೆ: 2 ರಲ್ಲಿ 4.00 ಎಕರೆ ವಿಸ್ತೀರ್ಣದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 668 ಗುತ್ತಿಗೆಯನ್ನು ಶ್ರೀಮತಿ ಎಸ್.ವಿ.ಮೀನಾಕ್ಷಮ್ಮ ರವರ ಹೆಸರಿನಲ್ಲಿ ಮಂಜೂರಾಗಿದ್ದ ಗುತ್ತಿಗೆಯನ್ನು ರದ್ದುಗೊಳಿಸಿದ ದಿನಾಂಕ: 3–7–2010 ರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಾವಳಿ 1994 ರ ನಿಯಮಗಳು ಹಾಗೂ ಡಾ.ಯು.ವಿ.ಸಿಂಗ್ ರವರ ವರದಿಯಂತೆ ಅರಣ್ಯ ಗಡಿಪ್ರದೇಶದಿಂದ 100 ಮೀಟರ್ ಅಂತರದ ಪ್ರದೇಶವನ್ನು ಹೊರತುಪಡಿಸುವ ಹಾಗೂ ಸ್ಥಿರ ಬಾಡಿಗೆ ಮತ್ತಿತರೆ ಬಾಕಿ ಮೊತ್ತಗಳನ್ನು ಸರ್ಕಾರಕ್ಕೆ ಸಮಯಕ್ಕೆ ಸರಿಯಾಗಿ ಪಾವತಿಸುವುದು ಮತ್ತು ಅರಣ್ಯ ಕಾಯ್ದೆ/ನಿಯಮಗಳನ್ನು ಪಾಲಿಸುವ ಷರತ್ತಿಗಳಿಗೆ ಒಳಪಡಿಸಿ ಕಲ್ಲು ಗಣಿ ಗುತ್ತಿಗೆ ಅವಧಿ ಹಾಗೂ ಇನ್ನಿತರ ಷರತ್ತಿನಂತೆ ಗುತ್ತಿಗೆಯನ್ನು **ಪುನರ್ ಸ್ಥಾಪಿಸಲಾಗಿದೆ.**

ಪಿ.ಆರ್.161 ನಿರ್ದೇಶಕರು

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ: ಕೊಪ್ಪಳ** ಜಿಲ್ಲೆ, **ಕುಷ್ಟಗಿ** ತಾಲ್ಲೂಕು, ಹೂಲಗಿರಿ ಗ್ರಾಮದಲ್ಲಿ **ಪಿಂಕ್** ಗ್ರಾನೈಟ್‌ಗಾಗಿ **ಮೆ॥. ಸಪ್ತಗಿರಿ ಸ್ಟೋನ್ಸ್** ರವರಿಗೆ ಮಂಜೂರಾಗಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:**724**ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ **ರೂ.77,044/–** ಗಳನ್ನು ಪಾವತಿಸದೆ ಇದ್ದ ಕಾರಣ **ರದ್ದುಗೊಳಿಸುವ** ಬಗ್ಗೆ.

**ಉಲ್ಲೇಖ: 1.** ಈ ಕಛೇರಿಯ ಅಂತಿಮ ನೋಟೀಸು ಪತ್ರ ಸಂಖ್ಯೆ:ಗಭೂಇ/ಡಿಸಿಬಿ/ಕಗು/724 /2010–11/ 8238–39, ದಿನಾಂಕ 25.10.2010.

**2.** ಹಿರಿಯ ಭೂ ವಿಜ್ಞಾನಿ (ಖ), ಕೊಪ್ಪಳ ರವರ 2009–10 ನೇ ಸಾಲಿನ ಲೆಕ್ಕ ಪರಿಶೀಲನಾ ವರದಿ.

**ಪ್ರಸ್ತಾವನೆ:**

**ಕೊಪ್ಪಳ** ಜಿಲ್ಲೆ, **ಕುಷ್ಟಗಿ** ತಾಲ್ಲೂಕು, **ಹೂಲಗಿರಿ** ಗ್ರಾಮದ ಸರ್ವೆ ಸಂಖ್ಯೆ: **48/8** ರಲ್ಲಿ **ಮೆ॥. ಸಪ್ತಗಿರಿ ಸ್ಟೋನ್ಸ್** ರವರಿಗೆ **ಪಿಂಕ್** ಗ್ರಾನೈಟ್‌ಗಾಗಿ 2–24 ಎಕರೆಗೆ ದಿನಾಂಕ 11.08.2005 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿಗುತ್ತಿಗೆ ಸಂಖ್ಯೆ:724 ರಲ್ಲಿ ಗುತ್ತಿಗೆಯು ಮಂಜೂರು ಮಾಡಲಾಗಿತ್ತು. 2009–10ನೇ ಸಾಲಿನ ಅಂತ್ಯದ ವರೆವಿಗೂ ರೂ.77,044/–ಗಳು ಬಾಕಿ ಇರುವುದಾಗಿ ಹಿರಿಯ ಭೂವಿಜ್ಞಾನಿ(ಖನಿಜ), ಕೊಪ್ಪಳ ರವರು ತಮ್ಮ ಲೆಕ್ಕ ಪರಿಶೀಲನಾ ಮತ್ತು ತಪಾಸಣಾ ವರದಿಯಲ್ಲಿ ವರದಿ ಮಾಡಿರುತ್ತಾರೆ. ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಡಿಯಲ್ಲಿ ಈ ಕಛೇರಿಯ ಉಲ್ಲೇಖಿತ ಪತ್ರದಂತೆ ಗುತ್ತಿಗೆದಾರರಿಗೆ ಅಂತಿಮ ನೋಟೀಸು ಪತ್ರವನ್ನು ನೀಡಿ ಬಾಕಿ ರೂ.77,044/–ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ತಿಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸ್‌ಗೆ ಯಾವ ರೀತಿಯು ಸ್ಪಂದಿಸಿಲ್ಲದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಡಿ ಸರ್ಕಾರದ ಅಧಿಸೂಚನೆ III

ಸಂಖ್ಯೆ:ಸಿಐ 418 ಎಂ.ಆರ್.ಸಿ. 92 ದಿ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:724ರಲ್ಲಿರುವ ಪಿಂಕ್ ಗ್ರಾನೈಟ್ ಗುತ್ತಿಗೆಯನ್ನು ರದ್ದು ಪಡಿಸುವ ಕ್ರಮ ಜರುಗಿಸುವುದು ಅವಶ್ಯಕವಾಗಿರುವುದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/ 724/2010–11/14126, ದಿನಾಂಕ:7ನೇ ಜನವರಿ, 2011**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ **ಕೊಪ್ಪಳ** ಜಿಲ್ಲೆ **ಕುಷ್ಟಗಿ** ತಾಲ್ಲೂಕು **ಹೂಲಗಿರಿ** ಗ್ರಾಮದ ಸರ್ವೆ ಸಂಖ್ಯೆ **48/8** ರಲ್ಲಿ 2–24ಎಕರೆಗೆ **ಪಿಂಕ್ ಗ್ರಾನೈಟ್**ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:724ರಲ್ಲಿರುವ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೇ ಇರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ **ರದ್ದುಪಡಿಸಲಾಗಿದೆ** ಹಾಗೂ ಈ ಗುತ್ತಿಗೆ ಮಂಜೂರಾತಿ ಸಮಯದಲ್ಲಿ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿ.ಆರ್.144 ನಿರ್ದೇಶಕರು

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** **ಕೊಪ್ಪಳ** ಜಿಲ್ಲೆ, **ಕುಷ್ಟಗಿ** ತಾಲ್ಲೂಕು, ಹೂಲಗಿರಿ ಗ್ರಾಮದಲ್ಲಿ **ಪಿಂಕ್** ಗ್ರಾನೈಟ್‌ಗಾಗಿ **ಶ್ರೀ ಹೆಚ್.ವೈ.ದೇವದುರ್ಗ** ರವರಿಗೆ ಮಂಜೂರಾಗಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:**445**ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ **ರೂ.86,231/–** ಗಳನ್ನು ಪಾವತಿಸದೆ ಇದ್ದ ಕಾರಣ **ರದ್ದುಗೊಳಿಸುವ** ಬಗ್ಗೆ.

**ಉಲ್ಲೇಖ: 1.** ಈ ಕಛೇರಿಯ ಅಂತಿಮ ನೋಟೀಸು ಪತ್ರ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/445 / 2010–11/ 6740–46, ದಿನಾಂಕ 11.11.2010.

**2.** ಹಿರಿಯ ಭೂ ವಿಜ್ಞಾನಿ (ಖ), ಕೊಪ್ಪಳ ರವರ 2009–10 ನೇ ಸಾಲಿನ ಲೆಕ್ಕ ಪರಿಶೀಲನಾ ವರದಿ.

**ಪ್ರಸ್ತಾವನೆ:**

**ಕೊಪ್ಪಳ** ಜಿಲ್ಲೆ, **ಕುಷ್ಟಗಿ** ತಾಲ್ಲೂಕು, **ಹೂಲಗಿರಿ** ಗ್ರಾಮದ ಸರ್ವೆ ಸಂಖ್ಯೆ: **409**ರಲ್ಲಿ **ಶ್ರೀ ಹೆಚ್.ವೈ.ದೇವದುರ್ಗ** ರವರಿಗೆ **ಪಿಂಕ್** ಗ್ರಾನೈಟ್‌ಗಾಗಿ 1–00 ಎಕರೆಗೆ ದಿನಾಂಕ 25.05.2001 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿಗುತ್ತಿಗೆ ಸಂಖ್ಯೆ:445 ರಲ್ಲಿ ಗುತ್ತಿಗೆಯು ಮಂಜೂರು ಮಾಡಲಾಗಿತ್ತು. 2009–10ನೇ ಸಾಲಿನ ಅಂತ್ಯದ ವರೆವಿಗೂ ರೂ.86,231/–ಗಳು ಬಾಕಿ ಇರುವುದಾಗಿ ಹಾಗೂ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವುದಾಗಿ ಹಿರಿಯ ಭೂವಿಜ್ಞಾನಿ(ಖನಿಜ), ಕೊಪ್ಪಳ ರವರು ತಮ್ಮ ಲೆಕ್ಕ ಪರಿಶೀಲನಾ ಮತ್ತು ತಪಾಸಣಾ ವರದಿಯಲ್ಲಿ ವರದಿ ಮಾಡಿರುತ್ತಾರೆ. ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 6 (1) ಮತ್ತು 39 ರಡಿಯಲ್ಲಿ ಈ ಕಛೇರಿಯ ಉಲ್ಲೇಖಿತ ಪತ್ರದಂತೆ ಗುತ್ತಿಗೆದಾರರಿಗೆ ಅಂತಿಮ ನೋಟೀಸು ಪತ್ರವನ್ನು ನೀಡಿ ಬಾಕಿ ರೂ.86,231/–ಗಳನ್ನು 60 ದಿನಗಳೊಳಗೆ ಸಂದಾಯ ಮಾಡುವಂತೆ ಹಾಗೂ ಗಣಿಗಾರಿಕೆ ನಡೆಸದೆ ನಿಷ್ಕ್ರಿಯಗೊಳಿಸಿರುವ ಬಗ್ಗೆ ತಿಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸ್‌ಗೆ ಯಾವ ರೀತಿಯು ಸ್ಪಂದಿಸಿಲ್ಲದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಆರ್.ಸಿ. 92 ದಿ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:445ರಲ್ಲಿರುವ ಪಿಂಕ್ ಗ್ರಾನೈಟ್ ಗುತ್ತಿಗೆಯನ್ನು ರದ್ದು ಪಡಿಸುವ ಕ್ರಮ ಜರುಗಿಸುವುದು ಅವಶ್ಯಕವಾಗಿರುವುದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/ 445/2010–11/14107, ದಿನಾಂಕ: 7ನೇ ಜನವರಿ, 2011**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ **ಕೊಪ್ಪಳ** ಜಿಲ್ಲೆ **ಕುಷ್ಟಗಿ** ತಾಲ್ಲೂಕು **ಹೂಲಗಿರಿ** ಗ್ರಾಮದ ಸರ್ವೆ ಸಂಖ್ಯೆ **409** ರಲ್ಲಿ 1–00 ಎಕರೆಗೆ **ಪಿಂಕ್ ಗ್ರಾನೈಟ್**ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:445ರಲ್ಲಿರುವ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೇ ಇರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ **ರದ್ದುಪಡಿಸಲಾಗಿದೆ** ಹಾಗೂ ಈ ಗುತ್ತಿಗೆ ಮಂಜೂರಾತಿ ಸಮಯದಲ್ಲಿ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿ.ಆರ್.120 ನಿರ್ದೇಶಕರು

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** **ತುಮಕೂರು** ಜಿಲ್ಲೆ, **ಶಿರಾ** ತಾಲ್ಲೂಕು, ಮದ್ದಕನಹಳ್ಳಿ ಗ್ರಾಮದಲ್ಲಿ **ಗ್ರೇ** ಗ್ರಾನೈಟ್‌ಗಾಗಿ **ಶ್ರೀಮತಿ ಜಯಮ್ಮ ಬಿನ್ ಲೇಟ್ ಬಿ.ಜಿ.ರಾಮದಾಸ್** ರವರಿಗೆ ಮಂಜೂರಾಗಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:**788**ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ **ರೂ.87,010/–** ಗಳನ್ನು ಪಾವತಿಸದೆ ಇದ್ದ ಕಾರಣ **ರದ್ದುಗೊಳಿಸುವ** ಬಗ್ಗೆ.

**ಉಲ್ಲೇಖ: 1.** ಈ ಕಛೇರಿಯ ಅಂತಿಮ ನೋಟೀಸು ಪತ್ರ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/788/2010–11/ 5480–82, ದಿನಾಂಕ 15.09.2010.

**2.** ಉಪ ನಿರ್ದೇಶಕರು, ತುಮಕೂರು ರವರ 2009–10 ನೇ ಸಾಲಿನ ಲೆಕ್ಕ ಪರಿಶೀಲನಾ ವರದಿ.

**ಪ್ರಸ್ತಾವನೆ:**

**ತುಮಕೂರು** ಜಿಲ್ಲೆ, **ಶಿರಾ** ತಾಲ್ಲೂಕು, ಮದ್ದಕನಹಳ್ಳಿ ಗ್ರಾಮದ ಸರ್ವೆ ಸಂಖ್ಯೆ: **26**ರಲ್ಲಿ **ಶ್ರೀಮತಿ ಜಯಮ್ಮ ಬಿನ್ ಲೇಟ್ ಬಿ.ಜಿ.ರಾಮದಾಸ್ ರವರಿಗೆ** **ಗ್ರೇ** ಗ್ರಾನೈಟ್‌ಗಾಗಿ 1–30 ಎಕರೆಗೆ ದಿನಾಂಕ 28.02.2007 ರಿಂದ 05 ವರ್ಷಗಳಿಗಾಗಿ ಕಲ್ಲು ಗಣಿಗುತ್ತಿಗೆ ಸಂಖ್ಯೆ:788 ರಲ್ಲಿ ಗುತ್ತಿಗೆಯು ಮಂಜೂರು ಮಾಡಲಾಗಿತ್ತು. 2009–10ನೇ ಸಾಲಿನ ಅಂತ್ಯದ ವರೆವಿಗೂ ರೂ.87,010/–ಗಳು ಬಾಕಿ ಇರುವುದಾಗಿ ಉಪ ನಿರ್ದೇಶಕರು, ತುಮಕೂರು

ರವರು ತಮ್ಮ ಲೆಕ್ಕ ಪರಿಶೀಲನಾ ಮತ್ತು ತಪಾಸಣಾ ವರದಿಯಲ್ಲಿ ವರದಿ ಮಾಡಿರುತ್ತಾರೆ. ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಡಿಯಲ್ಲಿ ಈ ಕಛೇರಿಯ ಉಲ್ಲೇಖಿತ ಪತ್ರದಂತೆ ಗುತ್ತಿಗೆದಾರರಿಗೆ ಅಂತಿಮ ನೋಟೀಸು ಪತ್ರವನ್ನು ನೀಡಿ ಬಾಕಿ ರೂ.87,010/–ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ತಿಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸ್‌ಗೆ ಯಾವ ರೀತಿಯು ಸ್ಪಂದಿಸಿಲ್ಲದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಆರ್.ಸಿ. 92 ದಿ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:788ರ ಗುತ್ತಿಗೆಯನ್ನು ರದ್ದು ಪಡಿಸುವ ಕ್ರಮ ಜರುಗಿಸುವುದು ಅವಶ್ಯಕವಾಗಿರುವುದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/ 788/2010–11/4117, ದಿನಾಂಕ:7ನೇ ಜನವರಿ, 2011**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ **ತುಮಕೂರು** ಜಿಲ್ಲೆ **ಶಿರಾ ತಾಲ್ಲೂಕು ಮದ್ದಕನಹಳ್ಳಿ** ಗ್ರಾಮದ ಸರ್ವೆ ಸಂಖ್ಯೆ **26** ರಲ್ಲಿ 1–30 ಎಕರೆಗೆ **ಗ್ರೇ ಗ್ರಾನೈಟ್**‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:788ರ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೇ ಇರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ **ರದ್ದುಪಡಿಸಲಾಗಿದೆ** ಹಾಗೂ ಈ ಗುತ್ತಿಗೆ ಮಂಜೂರಾತಿ ಸಮಯದಲ್ಲಿ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿ.ಆರ್.123 ನಿರ್ದೇಶಕರು

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** ರಾಮನಗರ ಜಿಲ್ಲೆ ಕನಕಪುರ ತಾಲ್ಲೂಕು ಸಾಲಬನ್ನಿ ಗ್ರಾಮದಲ್ಲಿ ಮಲ್ಟಿ ಕಲರ್ ಗ್ರಾನೈಟ್‌ಗಾಗಿ ಶ್ರೀ.ಸಿ.ಆರ್. ಸ್ವಾಮಿ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:646ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.69,723/–ಗಳನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ: 1.** ಈ ಕಛೇರಿಯ ಪತ್ರ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/646/4211/ 08–09/ ದಿ:01.01.2009.

**ಪ್ರಸ್ತಾವನೆ:–**

ರಾಮನಗರ ಜಿಲ್ಲೆ ಕನಕಪುರ ತಾಲ್ಲೂಕು ಸಾಲಬನ್ನಿ ಗ್ರಾಮದ ಸರ್ವೆ ನಂ.18 ರಲ್ಲಿ ಶ್ರೀ.ಸಿ.ಆರ್.ಸ್ವಾಮಿ ರವರಿಗೆ 1.00 ಎಕರೆಗೆ ದಿ:27.04.2004 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:646 ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಉಲ್ಲೇಖಿತ ಪತ್ರದಂತೆ ಅಂತಿಮ ನೋಟೀಸನ್ನು ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2008ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.69,723/–ಗಳನ್ನು 60ದಿನಗಳೊಳಗೆ ಸಂದಾಯಿಸುವಂತೆ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಡಿ ನೋಟೀಸು ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ ಹಾಗೂ 2009–10ನೇ ಸಾಲಿಗೆ ರೂ.1,07,333/–ಗಳ ಬಾಕಿಯನ್ನು ಪಾವತಿಸಬೇಕಾಗಿರುತ್ತದೆ ಎಂದು ಉಪ ನಿರ್ದೇಶಕರು ರಾಮನಗರ ರವರು ವರದಿ ಮಾಡಿರುತ್ತಾರೆ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸುಗಳಿಗೆ ಯಾವ ರೀತಿಯು ಸ್ಪಂದಿಸಿಲ್ಲದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಆರ್.ಸಿ. 92 ದಿ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:646ನ್ನು ರದ್ದುಪಡಿಸುವ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ**

**ಆದೇಶ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/646/2010–11/14842, ದಿನಾಂಕ:24ನೇ ಜನವರಿ, 2011**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ರಾಮನಗರ ಜಿಲ್ಲೆ ಕನಕಪುರ ತಾಲ್ಲೂಕು ಸಾಲಬನ್ನಿ ಗ್ರಾಮದ ಸರ್ವೆ ನಂ.18 ರಲ್ಲಿ 1.00 ಎಕರೆಗೆ ಮಲ್ಟಿ ಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:646ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿ.ಆರ್.160 ನಿರ್ದೇಶಕರು

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** **ಕೊಪ್ಪಳ** ಜಿಲ್ಲೆ, **ಕುಷ್ಟಗಿ** ತಾಲ್ಲೂಕು, **ಹೊಲೀಗೆರೆ** ಗ್ರಾಮದಲ್ಲಿ **ಪಿಂಕ್** ಗ್ರಾನೈಟ್‌ಗಾಗಿ **ಶ್ರೀ ಆರ್.ಮೋಹನ್ ಗೌಡ** ರವರಿಗೆ ಮಂಜೂರಾಗಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:**443**ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.**4,16,737**/–ಗಳನ್ನು ಪಾವತಿಸದೆ ಇದ್ದ ಕಾರಣ **ರದ್ದುಗೊಳಿಸುವ** ಬಗ್ಗೆ,

**ಉಲ್ಲೇಖ:1.** ಈ ಕಛೇರಿಯ ಅಂತಿಮ ನೋಟೀಸು ಪತ್ರ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/ 443/ 2010–11/6736–37, ದಿನಾಂಕ 11.11.2010.

**2.** ಹಿರಿಯ ಭೂವಿಜ್ಞಾನಿ (ಖ) ಕೊಪ್ಪಳರವರ 2009–10ನೇ ಸಾಲಿನ ಲೆಕ್ಕ ಪರಿಶೀಲನಾ ವರದಿ.

**ಪ್ರಸ್ತಾವನೆ:**

**ಕೊಪ್ಪಳ** ಜಿಲ್ಲೆ, **ಕುಷ್ಟಗಿ** ತಾಲ್ಲೂಕು, **ಹೊಲೀಗೆರೆ** ಗ್ರಾಮದ ಸರ್ವೆ ನಂ.**48/2/4** ರಲ್ಲಿ ಶ್ರೀ **ಆರ್.ಮೋಹನ್ ಗೌಡ** ರವರಿಗೆ 3–00 ಎಕರೆಗೆ ದಿ:25.05.2001 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಸಂಖ್ಯೆ:443ರಲ್ಲಿ ಗುತ್ತಿಗೆಯು ಮಂಜೂರು ಮಾಡಲಾಗಿತ್ತು. 2009–10ನೇ ಸಾಲಿನ ಅಂತ್ಯದ ವರೆವಿಗೂ ರೂ.4,16,737/–ಗಳು ಬಾಕಿ ಇರುವುದಾಗಿ ಹಾಗೂ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವುದಾಗಿ ಹಿರಿಯ ಭೂವಿಜ್ಞಾನಿ(ಖನಿಜ) ಕೊಪ್ಪಳ ರವರು ತಮ್ಮ ಲೆಕ್ಕ ಪರಿಶೀಲನಾ ಮತ್ತು ತಪಾಸಣಾ ವರದಿಯಲ್ಲಿ ವರದಿ ಮಾಡಿರುತ್ತಾರೆ. ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಡಿಯಲ್ಲಿ ಈ ಕಛೇರಿಯ ಉಲ್ಲೇಖಿತ ಪತ್ರದಂತೆ ಗುತ್ತಿಗೆದಾರರಿಗೆ ಅಂತಿಮ ಸೂಚನಾ ಪತ್ರವನ್ನು ನೀಡಿ ಬಾಕಿ ರೂ.4,16,737/–ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ತಿಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸ್‌ಗೆ ಯಾವ ರೀತಿಯು ಸ್ಪಂದಿಸಿಲ್ಲದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಆರ್.ಸಿ. 92 ದಿ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:443ರಲ್ಲಿರುವ ಪಿಂಕ್ ಗ್ರಾನೈಟ್ ಗುತ್ತಿಗೆಯನ್ನು ರದ್ದು ಪಡಿಸುವ ಕ್ರಮ ಜರುಗಿಸುವುದು ಅವಶ್ಯಕವಾಗಿರುವುದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ**

**ಆದೇಶ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/443/2010–11/13999, ದಿನಾಂಕ:6ನೇ ಜನವರಿ, 2011**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ **ಕೊಪ್ಪಳ** ಜಿಲ್ಲೆ **ಕುಷ್ಟಗಿ** ತಾಲ್ಲೂಕು **ಹೋಲಿಗೆರೆ** ಗ್ರಾಮದ ಸರ್ವೆ ನಂ. **48/2/4** ರಲ್ಲಿ 3–00 ಎಕರೆಗೆ **ಪಿಂಕ್ ಗ್ರಾನೈಟ್**ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:443ರಲ್ಲಿರುವ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೇ ಇರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿ.ಆರ್.28 ನಿರ್ದೇಶಕರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಕಂಬಾಳು ಗ್ರಾಮದ ಸರ್ವೆ ನಂ.158ರಲ್ಲಿ ಪಿಂಕ್ ಪಾರ್ಪರಿ ಗ್ರಾನೈಟ್‌ಗಾಗಿ ಮೆ:ಸಪ್ತಗಿರಿ ಗ್ರಾನೈಟ್ಸ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:501ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:1.** ಈ ಕಛೇರಿಯ ನೋಟೀಸು ಪತ್ರ ಸಂಖ್ಯೆ: ಗಭೂಇ/ಕಗಗು–501/2010–11/ 13195–97, ದಿನಾಂಕ 20.12.2010.

**2.** ಅಧಿಸೂಚನೆ ಸಂಖ್ಯೆ:FEE 215/ENV 2000 ದಿನಾಂಕ 18.11.2003.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಕಂಬಾಳು ಗ್ರಾಮದ ಸರ್ವೆ ನಂ.158ರಲ್ಲಿ ಮೆ: ಸಪ್ತಗಿರಿ ಗ್ರಾನೈಟ್ಸ್ ರವರಿಗೆ ಪಿಂಕ್ ಪಾರ್ಪರಿ ಗ್ರಾನೈಟ್ಸ್‌ಗಾಗಿ 6–20 ಎಕರೆಗೆ ದಿನಾಂಕ 22.03.2002 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿಗುತ್ತಿಗೆ ಸಂಖ್ಯೆ: 501ನ್ನು ಮಂಜೂರು ಮಾಡಲಾಗಿತ್ತು.

ಸದರಿ ಪ್ರದೇಶದಲ್ಲಿ ಡಾ||ಯು.ವಿ.ಸಿಂಗ್ ರವರ ನೇತೃತ್ವದಲ್ಲಿ ಜಂಟಿ ಮೋಜಣಿ ಮಾಡಿ ವರದಿ ನೀಡಲು ಸರ್ಕಾರವು ಆದೇಶಿಸಿರುತ್ತದೆ ಅದರಂತೆ ಡಾ||ಯು.ವಿ.ಸಿಂಗ್, ಅರಣ್ಯ ಸಂರಕ್ಷಣಾಧಿಕಾರಿಗಳು ಇವರು ಸರ್ಕಾರಕ್ಕೆ ಸಲ್ಲಿಸಿರುವ ವರದಿಯ ಪ್ರಕಾರ 0–16ಎಕರೆ ಅರಣ್ಯ ಪ್ರದೇಶದಲ್ಲಿ ಒತ್ತುವರಿ ಗಣಿಗಾರಿಕೆ ಮಾಡಿದ್ದು ಹಾಗೂ 4–10 ಎಕರೆ ಅರಣ್ಯ ಪ್ರದೇಶದಲ್ಲಿ ಡಂಪಿಂಗ್ ಮಾಡಿರುವುದಾಗಿ ತಿಳಿಸಿರುತ್ತಾರೆ. ಈ ಅತಿ ಕ್ರಮದ ಬಗ್ಗೆ ಅರಣ್ಯ ಇಲಾಖೆಯವರು ನ್ಯಾಯಾಲಯದಲ್ಲಿ ಮೊಕದ್ದಮೆ ದಾಖಲಿಸಿರುತ್ತಾರೆ ಹಾಗೂ ತಿಪ್ಪಗೊಂಡನಹಳ್ಳಿ ಜಲಾಶಯಕ್ಕೆ ನೀರಿನ ಒಳ ಹರಿವು ಹೆಚ್ಚಿಸುವುದು ಮತ್ತು ನೀರಿನ ಮಾಲಿನ್ಯವಾಗದಂತೆ ತಡೆಗಟ್ಟುವುದು. ಅಣೆಕಟ್ಟಿನ ಸುರಕ್ಷತೆ ಹಾಗೂ ಬೆಂಗಳೂರು ನಗರಕ್ಕೆ ಕುಡಿಯುವ ನೀರನ್ನು ಲಭ್ಯಗೊಳಿಸುವ ದೃಷ್ಠಿಯಿಂದ ಸರ್ಕಾರವು ದಿನಾಂಕ 18.11.2003 ರಂದು ಅಧಿಸೂಚನೆ ಸಂಖ್ಯೆ:FEE 215 ENV 2000ರಂತೆ ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದಲ್ಲಿ ಯಾವುದೇ ಕಲ್ಲು ಗಣಿಗಾರಿಕೆಗೆ ಅನುಮತಿ ನೀಡಬಾರದಾಗಿ ಆದೇಶಿಸಿರುವ ಹಿನ್ನಲೆಯಲ್ಲಿ ಸಾರ್ವಜನಿಕ ಹಿತದೃಷ್ಠಿಯಿಂದ ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು (3) ರನ್ವಯ ಹಾಗೂ ಎಂ.ಎಂ.ಡಿ ಅಂಡ್ ಆರ್ ಆಕ್ಟ್ 1957ರ ನಿಯಮ 4(A) ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಆರ್.ಸಿ. 92 ದಿನಾಂಕ 02.07.1994ನ್ನು ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:501ರಲ್ಲಿರುವ ಪಿಂಕ್ ಪಾರ್ಪರಿ ಗ್ರಾನೈಟ್ ಗುತ್ತಿಗೆಯನ್ನು ರದ್ದು ಪಡಿಸುವ ಕ್ರಮ ಜರುಗಿಸುವುದು ಅವಶ್ಯಕವಾಗಿರುವುದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗಭೂಇ/ಕಗಗು–501/2010–11/ 14820, ದಿನಾಂಕ:24ನೇ ಜನವರಿ, 2011**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು (3)ರನ್ವಯ ಹಾಗೂ ಎಂ.ಎಂ.ಡಿ ಅಂಡ್ ಆರ್ ಆಕ್ಟ್ 1957ರ ನಿಯಮ 4 (A)ರಂತೆ ಹಾಗೂ ಸರ್ಕಾರದ ಅಧಿಸೂಚನೆ ದಿನಾಂಕ 18.11.2003ರಲ್ಲಿ ತಿಪ್ಪಗೊಂಡನಹಳ್ಳಿ ಜಲಾಶಯದ ವ್ಯಾಪ್ತಿಯಲ್ಲಿ ಯಾವುದೇ ಕಲ್ಲು ಗಣಿಗಾರಿಕೆಗೆ ಅನುಮತಿ ನೀಡಬಾರದಾಗಿ ಆದೇಶಿಸಿರುವ ಹಿನ್ನಲೆಯಲ್ಲಿ ಸಾರ್ವಜನಿಕ ಹಿತದೃಷ್ಠಿಯಿಂದ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಕಂಬಾಳು ಗ್ರಾಮದ

ಸರ್ವೆ ನಂ.158ರಲ್ಲಿ 6–20 ಎಕರೆಗೆ ಪಿಂಕ್ ಪಾರ್ಪರಿ ಗ್ರ್ಯಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:501 ರಲ್ಲಿರುವ ಗುತ್ತಿಗೆಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಪಿ.ಆರ್.159 ನಿರ್ದೇಶಕರು

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ:** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಹೂಲಗೇರಿ ಗ್ರಾಮದಲ್ಲಿ ಪಿಂಕ್ ಗ್ರ್ಯಾನೈಟ್‌ಗಾಗಿ ಮೆ: ತ್ರಿಮೂರ್ತಿ ಗ್ರ್ಯಾನೈಟ್ಸ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:330ರ ಗುತ್ತಿಗೆಯನ್ನು ಪುನರ್ ಸ್ಥಾಪಿಸುವ ಬಗ್ಗೆ.

**ಉಲ್ಲೇಖ:1.** ಸರ್ಕಾರದ ನಡವಳಿ ದಿನಾಂಕ:13.11.2008ರಲ್ಲಿನ ನಿರ್ದೇಶನದಂತೆ ಕ್ರಮ ಕೈಗೊಳ್ಳುವ ಬಗ್ಗೆ.

**2.** ಹಿರಿಯ ಭೂ ವಿಜ್ಞಾನಿ, ಕೊಪ್ಪಳ ರವರ ಪತ್ರ ಸಂಖ್ಯೆ: ಹಿಭೂವಿ/ಗಭೂಇ/ಕೊಖವಿ/ 2010–11/2343, ದಿನಾಂಕ:21.12.2010.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಹೂಲಗೇರಿ ಗ್ರಾಮದ ಸರ್ವೆ ಸಂಖ್ಯೆ:123/1/2ರಲ್ಲಿ 3.13 ಎಕರೆ ವಿಸ್ತೀರ್ಣದಲ್ಲಿ ಪಿಂಕ್ ಅಲಂಕಾರಿಕ ಶಿಲೆಗಾಗಿ ಕಲ್ಲು ಗಣಿಗುತ್ತಿಗೆ ಸಂಖ್ಯೆ:330ರ ಗುತ್ತಿಗೆಯನ್ನು ಮೆ: ತ್ರಿಮೂರ್ತಿ ಗ್ರ್ಯಾನೈಟ್ಸ್ ರವರ ಹೆಸರಿನಲ್ಲಿ, ದಿನಾಂಕ:20.05.2000 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿದ ಕಾರಣ ದಿನಾಂಕ:15.02.2007 ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

ಅದರಂತೆ ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53(2)ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು, ಅದರಂತೆ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಗುತ್ತಿಗೆದಾರರು ಬಾಕಿಯನ್ನು ಪೂರ್ಣ ಪಾವತಿಸಿರುವುದರಿಂದ ಈ ಕೆಳಕಂಡ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಗಭೂಇ/ಡಿಸಿಬಿ/ಕಗಗು/330/2010–11/ 14400, ದಿನಾಂಕ:13ನೇ ಜನವರಿ, 2011**

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಸರ್ಕಾರದ ಪತ್ರದ ದಿನಾಂಕ:13.11.2008ರಲ್ಲಿ ನಿರ್ದೇಶಿಸಿರುವಂತೆ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಹೂಲಗೇರಿ ಗ್ರಾಮದ ಸರ್ವೆ ಸಂಖ್ಯೆ:123/1/2ರಲ್ಲಿ 3–13 ಎಕರೆ ವಿಸ್ತೀರ್ಣದಲ್ಲಿ ಪಿಂಕ್ ಅಲಂಕಾರಿಕ ಗ್ರ್ಯಾನೈಟ್‌ಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:330ರ ಗುತ್ತಿಗೆಯನ್ನು ಮೆ: ತ್ರಿಮೂರ್ತಿ ಗ್ರ್ಯಾನೈಟ್ಸ್ ರವರ ಹೆಸರಿನಲ್ಲಿ ಮಂಜೂರಾಗಿದ್ದ ಗುತ್ತಿಗೆಯನ್ನು ರದ್ದುಗೊಳಿಸಿದ ದಿನಾಂಕ:15.02.2007 ರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಾವಳಿ 1994ರ ನಿಯಮಗಳ ಷರತ್ತಿಗೆ ಒಳಪಡಿಸಿ ಕಲ್ಲು ಗಣಿ ಗುತ್ತಿಗೆ ಅವಧಿ ಹಾಗೂ ಇನ್ನಿತರ ಷರತ್ತಿನಂತೆ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ.

ಪಿ.ಆರ್.61 ನಿರ್ದೇಶಕರು

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ:** ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು, ಮರಳಬೇಕುಪ್ಪೆ ಗ್ರಾಮದಲ್ಲಿ ಮಲ್ಟಿಕಲರ್ ಗ್ರ್ಯಾನೈಟ್‌ಗಾಗಿ ಶ್ರೀ ಡಿ.ಕೆ. ಶಿವಕುಮಾರ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:678ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.77,129/– ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:1.** ಕ.ಉ.ಖ.ರಿ.ನಿ.94ರ ನಿಯಮ 6(1) ಮತ್ತು ನಿಯಮ 39ರಡಿ ಈ ಕಛೇರಿಯ ಅಂತಿಮ ನೋಟೀಸ್‌ನ ಪತ್ರ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/678/08–09/4233 ದಿನಾಂಕ:01.01.2009.

**2.** ಉಪ ನಿರ್ದೇಶಕರು ರಾಮನಗರ ರವರ ಪತ್ರ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/678/09–10/5159, ದಿನಾಂಕ:08.09.2009.

**ಪ್ರಸ್ತಾವನೆ:**

ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ಮರಳಬೇಕುಪ್ಪೆ ಗ್ರಾಮದ ಸರ್ವೆ ನಂ.695/10 ರಲ್ಲಿ ಶ್ರೀ ಡಿ.ಕೆ. ಶಿವಕುಮಾರ ರವರಿಗೆ 1.26 ಎಕರೆಗೆ ದಿನಾಂಕ:21.10.2004 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:678 ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ:ಗಭೂಇ/ಡಿಸಿಬಿ/ಕಗಗು/678/4233/08–09, ದಿನಾಂಕ:01.01.2009 ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2009ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.76,829/–ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದೆ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರಿಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಡಿ ನೋಟೀಸ್ ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ ಎಂದು ಉಪ ನಿರ್ದೇಶಕರು, ರಾಮನಗರ ರವರು ವರದಿ ಮಾಡಿರುತ್ತಾರೆ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸುಗಳಿಗೆ ಯಾವ ರೀತಿಯು ಸ್ಪಂದಿಸಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಡಿ ಸರ್ಕಾರದ ಅಧಿಸೂಚನೆ–III ಸಂಖ್ಯೆ:ಸಿಐ 418 ಎಂ.ಆರ್.ಸಿ.92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:678ರಡಿ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

